## ಪ್ರಕಾಶಕರ ಮಾತು

"ಆಲ್ ಇಂಡಿಯಾ ಡಿವೈನ್ ಲೈಫ್ ಕಾನ್ಫರೆನ್ಸ್"ನ ಆಶ್ರಯದಲ್ಲಿ 19-02-1972ರಂದು ಕಟಕ್‌ನಲ್ಲಿ ಜರಗಿದ ಸಭೆಯಲ್ಲಿ ಜಮಾಅತೆ ಇಸ್ಲಾಮಿ ಹಿಂದ್‌ನ ಅಖಿಲ ಭಾರತ ಅಧ್ಯಕ್ಷರಾಗಿದ್ದ ಮರ್‌ಹೂಮ್| ಮೌಲಾನಾ ಮುಹಮ್ಮದ್ ಯೂಸುಫ್ ಸಾಹೇಬರು ಮಾಡಿದ ಭಾಷಣದ ಕನ್ನಡಾನುವಾದವನ್ನು 'ಏಕತಾಶಕ್ತಿ' ಎಂಬ ಹೆಸರಲ್ಲಿ ಪ್ರಕಟಿಸುತ್ತಿದ್ದೇವೆ.

ಈ ಹೊತ್ತಗೆಯ ಮೂರು ಆವೃತ್ತಿಗಳು ಈಗಾಗಲೇ ಹೊರಬಂದು ಪ್ರತಿಗಳೆಲ್ಲ ಮಾರಾಟವಾಗಿರುತ್ತವೆ. ಅದರ ಚತುರ್ಥ ಆವೃತ್ತಿಯನ್ನು ಇದೀಗ ವಾಚಕ ವೃಂದದ ಮುಂದಿರಿಸುತ್ತಿದ್ದೇವೆ.

ಇಸ್ಲಾಮಿನ ಮೂಲ ವಿಶ್ವಾಸಗಳಾದ ಏಕದೇವತ್ವ, ಪ್ರವಾದಿತ್ವ ಮತ್ತು ಪರಲೋಕಗಳಿಗೆ ಸಂಬಂಧಿಸಿದ ವಿಷಯಗಳನ್ನು ಬಹಳ ಸಂಕ್ಷಿಪ್ತವಾಗಿ ಮತ್ತು ವಸ್ತುನಿಷ್ಠವಾಗಿ ಇದರಲ್ಲಿ ವಿವರಿಸಲಾಗಿದೆ.

ಇಸ್ಲಾಮಿನ ಮೂಲ ತತ್ವ-ಸಿದ್ಧಾಂತಗಳ ತಿರುಳನ್ನು ತಿಳಿಯಲಿಚ್ಛಿಸುವವರಿಗೆ ಈ ಕೃತಿ ಉಪಯುಕ್ತವಾಗಬಹುದು.

ಮಾನವೀಯ ಏಕತಾ ಭಾವನೆಯೊಂದಿಗೆ ಜೀವಿಸುವ ವಾತಾವರಣವನ್ನು ಸೃಷ್ಟಿಸುವ ನಿಟ್ಟಿನಲ್ಲಿ ಈ ಕೃತಿ ಸಹಕಾರಿಯಾಗಲೆಂದು ಹಾರೈಸಿ ಅದಕ್ಕಾಗಿ ಸೃಷ್ಟಿಕರ್ತನಲ್ಲಿ ಪ್ರಾರ್ಥಿಸುತ್ತೇವೆ.

ಶಾಂತಿ ಪ್ರಕಾಶನ

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

ಡಿವೈನ್ ಲೈಫ್ ಸೊಸೈಟಿಯ ಆಶ್ರಯದಲ್ಲಿ ಜರಗುತ್ತಿರುವ ಈ ಸಭೆಯಲ್ಲಿ ನೆರೆದಿರುವ ವಿದ್ಯಾವಂತ ಸಹೋದರ ಸಹೋದರಿಯರನ್ನುದ್ದೇಶಿಸಿ ಭಾಷಣ ಮಾಡುವ ಅವಕಾಶ ದೊರೆತುದಕ್ಕಾಗಿ ತುಂಬಾ ಸಂತೋಷ ಪಡುತ್ತೇನೆ. ಸಂಪೂರ್ಣ ಭೌತಿಕವಾಗಿರುವ ಈ ಕಾಲದಲ್ಲಿಯೂ ಇಂತಹ ಧಾರ್ಮಿಕ ಸಭೆಗಳನ್ನು ಜರಗಿಸುತ್ತಿರುವುದನ್ನು ನೋಡುವಾಗ ಮಾನವನು ಕೇವಲ ಆಹಾರಕ್ಕಾಗಿ ಜೀವಿಸದೆ ಆತನ ನೈತಿಕ ಮತ್ತು ಆಧ್ಯಾತ್ಮಿಕ ಪ್ರೇರಣೆಗಳಿಗೂ ಸಂತೃಪ್ತಿಯ ಬಯಕೆಯಿರುವುದು ವ್ಯಕ್ತವಾಗುತ್ತದೆ. ಜಮಾಅತೆ ಇಸ್ಲಾಮಿ ಹಿಂದ್ ಇದರ ಪ್ರತಿನಿಧಿಯೆಂಬ ನೆಲೆಯಲ್ಲಿ ಪ್ರವಾದಿಗಳ ಧರ್ಮವಾಗಿರುವ ಇಸ್ಲಾಮಿನ ಮುಖ್ಯಾಂಶಗಳನ್ನೂ, ವ್ಯಕ್ತಿ ಮತ್ತು ಸಮಾಜ ಸುಧಾರಣೆಯಲ್ಲಿ ಅದರ ಪಾತ್ರವನ್ನೂ ಸಂಕ್ಷಿಪ್ತವಾಗಿ ವಿವರಿಸ ಬಯಸುತ್ತೇನೆ.

## ಏಕದೇವ-ಏಕ ಮಾನವಕುಲ

ದೇವನು ಒಬ್ಬನೇ ಎಂಬ ಕರೆ ನೀಡಿರುವ ಇಸ್ಲಾಮ್ ಧರ್ಮವು ಏಕ ಮಾನವ ಕುಲ, ಏಕಧರ್ಮ ಅರ್ಥಾತ್ ಜೀವನ ಪದ್ಧತಿಯೆಂದೂ ಘೋಷಿಸಿದೆ. ಆದ್ದರಿಂದ ದೇವ, ಮಾನವಕುಲ ಮತ್ತು ಧರ್ಮದ ಏಕತೆಗಳು ಇಸ್ಲಾಮಿನ ವೈಶಿಷ್ಟ್ಯಗಳಾಗಿವೆ.

## ಏಕಧರ್ಮ

ದೇವನು ಮಾನವಕುಲಕ್ಕೆ ಹಲವು ಧರ್ಮಗಳನ್ನು ನೀಡಲಿಲ್ಲ. ಲೋಕಾರಂಭದಿಂದಲೇ ಸೃಷ್ಟಿಕರ್ತ, ಸಂರಕ್ಷಕ, ಒಡೆಯ, ಪ್ರಭು, ಆಜ್ಞಾಧಿಕಾರಿ

ಹಾಗೂ ಶಿಷ್ಟ ಜನರಿಗೆ ಪ್ರತಿಫಲವನ್ನೂ ದುಷ್ಟ ಜನರಿಗೆ ಶಿಕ್ಷೆಯನ್ನೂ ನೀಡುವ ನ್ಯಾಯಾಧೀಶನಾದ ಆ ಏಕದೇವನಿಗೆ ಸಂಪೂರ್ಣ ಶರಣಾಗತಿ ಮತ್ತು ವಿಧೇಯತೆಯನ್ನು ಬಯಸುವ ಏಕೈಕ ಧರ್ಮ ಮಾತ್ರವಿತ್ತು.

ಏಕ ದೇವತ್ವವು ಸ್ವಾಭಾವಿಕವಾಗಿ ಒಂದೇ ಮೂಲಧರ್ಮವನ್ನು ಬಯಸುತ್ತದೆ. ಬಹುದೇವತ್ವವು ಅನೇಕ ಧರ್ಮಗಳನ್ನು ಪರಿಚಯಿಸುತ್ತದೆ. ದೇವನಿಗೆ ಸಂಪೂರ್ಣ ಶರಣಾಗತಿ ಮತ್ತು ವಿಧೇಯವಾಗಿರುವ ಈ ಧರ್ಮವನ್ನು ವಿವಿಧ ಭಾಷೆಗಳಲ್ಲಿ ವಿಭಿನ್ನ ಹೆಸರುಗಳಿಂದ ಕರೆಯಲಾಗುತ್ತಿತ್ತು. ಅರಬೀ ಭಾಷೆಯಲ್ಲಿ 'ಇಸ್ಲಾಮ್' ಎಂಬ ಪದವು ದೇವನಿಗೆ ಸಂಪೂರ್ಣ ಶರಣಾಗತಿ ಮತ್ತು ವಿಧೇಯತೆಯೆಂಬರ್ಥವನ್ನು ಸೂಚಿಸುತ್ತದೆ.

ಇಸ್ಲಾಮ್ ಧರ್ಮಕ್ಕೆ ಅದರ ಸ್ಥಾಪಕನಿಂದ ಅಥವಾ ಅದು ಹುಟ್ಟಿ ಬೆಳೆದ ಸಮುದಾಯಗಳಿಂದ ಆ ಹೆಸರು ಬರಲಿಲ್ಲ. ದೇವನೇ ಆ ಧರ್ಮಕ್ಕೆ ಇಸ್ಲಾಮ್ ಎಂಬ ನಾಮಕರಣ ಮಾಡಿದನು. ಕುರ್ಆನ್ ಹೇಳುತ್ತದೆ: "ನಿಶ್ಚಯವಾಗಿಯೂ ದೇವನ ಬಳಿ ಧರ್ಮವು ಇಸ್ಲಾಮ್ ಮಾತ್ರವಾಗಿದೆ". (3:19) ಅರ್ಥಾತ್ ದೇವನಿಗೆ ಶರಣಾಗತಿ ಮತ್ತು ವಿಧೇಯತೆಯಾಗಿದೆ.

## ಇಸ್ಲಾಮ್-ಎಲ್ಲ ಪ್ರವಾದಿಗಳ ಧರ್ಮ

ಕ್ರೈಸ್ತ ಧರ್ಮವನ್ನು ಏಸುಕ್ರಿಸ್ತರ, ಝುರತುಷ್ಟ ಧರ್ಮವನ್ನು ಅದರ ಸ್ಥಾಪಕನಾದ ಝುರತುಷ್ಟನ, ಬೌದ್ಧ ಧರ್ಮವನ್ನು ಅದರ ಸ್ಥಾಪಕನಾದ ಗೌತಮ ಬುದ್ಧನ, ಯಹೂದೀ ಧರ್ಮವನ್ನು ಯಹೂದಾ ವಂಶದ, ಹಿಂದೂ ಧರ್ಮವನ್ನು ಹಿಂದ್ ಅಥವಾ ಹಿಂದೂಸ್ಥಾನವೆಂಬ ಹೆಸರುಗಳಿಂದ ಜನರು ಕರೆದಂತೆಯೇ ಐರೋಪ್ಯರು ಇಸ್ಲಾಮ್ ಧರ್ಮವನ್ನು ಪ್ರವಾದಿಯವರ ಹೆಸರಿನೊಂದಿಗೆ ಸೇರಿಸಿ "ಮುಹಮ್ಮದೀಯ" ವೆಂದು ತಪ್ಪಾಗಿ ಕರೆಯುತ್ತಾರೆ. ಅದೇನಿದ್ದರೂ, ಇಸ್ಲಾಮ್ ಧರ್ಮವು ಲೋಕದ ಎಲ್ಲ ಪ್ರವಾದಿಗಳ ಏಕೈಕ ಧರ್ಮವೆಂದು ಪ್ರತಿಪಾದಿಸುವ ಮೂಲಕ ಬಹುಧರ್ಮ ವಾದವನ್ನು ನಿರಾಕರಿಸುತ್ತದೆ. ಮಾನವಕುಲವನ್ನು ವಿಂಗಡಿಸುವ ಬದಲಾಗಿ ಏಕೀಕರಿಸುವುದೇ ಇಸ್ಲಾಮಿನ ಪ್ರಧಾನ ಗುರಿಯಾಗಿದೆ. ಪ್ರತಿಯೊಂದು ಮಗುವೂ ಇಸ್ಲಾಮಿನಲ್ಲಿ ಜನಿಸುತ್ತದೆ. ಅದರ ಮಾತಾಪಿತರು ಅದನ್ನು ವಿಭಿನ್ನಗೊಳಿಸುತ್ತಾರೆಂದು ಅಂತಿಮ ಪ್ರವಾದಿ(ಸ) ಹೇಳಿದ್ದಾರೆ.

## ಇಸ್ಲಾಮ್ ಅಂದರೆ ಶರಣಾಗತಿ

ಅಧಿಕಾರದಲ್ಲಿ ಭಾಗೀದಾರರಿಲ್ಲದ ಕರುಣಾಮಯಿಯಾದ ದೇವನ ಇಚ್ಛೆ ಮತ್ತು ಕಾನೂನುಗಳಿಗೆ ಶರಣಾಗಿ ಆತನಿಗೆ ವಿಧೇಯವಾಗಿರುವುದೇ ಇಸ್ಲಾಮ್ ಆಗಿದೆ. ದೇವತ್ವ ಮತ್ತು ಅಧಿಕಾರದಲ್ಲಿ ಆತನಿಗೆ ಯಾರೂ ಭಾಗೀದಾರರಿಲ್ಲ. ಈ ವಿಶ್ವವನ್ನು ಆತನೇ ಸೃಷ್ಟಿಸಿದ್ದಾನೆ. ಆತನೇ ಆಳುವವನು, ಪರಮಾಧಿಕಾರಿ, ಆಜ್ಞೆ ನೀಡುವವನು ಮತ್ತು ವಿಶ್ವದ ಸಂರಕ್ಷಕನೂ ಆಗಿದ್ದಾನೆ. ಮಾನವನ ಲೌಕಿಕ ಬೇಡಿಕೆಗಳಂತೆಯೇ ನೈತಿಕ ಮತ್ತು ಆಧ್ಯಾತ್ಮಿಕ ಆವಶ್ಯಕತೆಗಳನ್ನೂ ಆತನು ಪೂರೈಸಿದ್ದಾನೆ. ವೈಯಕ್ತಿಕ ಹಾಗೂ ಸಾಮೂಹಿಕ ನೆಲೆಯಲ್ಲಿ ಮಾನವನಿಗೆ ಶ್ರೇಷ್ಠ ಹಾಗೂ ಸಂತುಲಿತ ಜೀವನ ವಿಧಾನದ ಮಾರ್ಗದರ್ಶನ ನೀಡಿದ್ದಾನೆ. ಮಾನವನಿಗೆ ಒಳಿತು-ಕೆಡುಕು, ಸರಿ-ತಪ್ಪು, ನೈತಿಕ ಮತ್ತು ಅನೈತಿಕ ಜೀವನಗಳ ತಿಳುವಳಿಕೆಗಳನ್ನು ದಯಪಾಲಿಸಿದ್ದಾನೆ. ಜೀವನದ ಎಲ್ಲ ರಂಗಗಳಿಗೂ ಸರಿಯಾದ ಪದ್ಧತಿಯನ್ನು ಒಳಗೊಂಡಿರುವ ಪ್ರಸ್ತುತ ಮಾರ್ಗದರ್ಶನವನ್ನೇ ಧರ್ಮವೆಂದು ಕರೆಯಲಾಗುತ್ತದೆ. ದೇವನೇ ಧರ್ಮದ ಸೂತ್ರಧಾರನಾಗಿರುವುದರಿಂದ ವಿವಿಧ ಕಾಲಗಳಲ್ಲಿ, ವಿವಿಧ ಜನರಿಗೆ ಜೀವನದ ಮೂಲ ವ್ಯವಹಾರಗಳಲ್ಲಿ ಪಾಲಿಸಬೇಕಾದ ರೀತಿಯ ಕುರಿತು ಪರಸ್ಪರ ವಿರುದ್ಧವಾದ ನಿರ್ದೇಶಗಳನ್ನು ನೀಡಿರಲಾರನು. ತಮ್ಮ ಏಕೈಕ ಅಧಿಪತಿ ಮತ್ತು ಒಡೆಯನಾದ ದೇವನಿಗೆ ಸಂಪೂರ್ಣ ಶರಣಾಗಿ, ಆತನ ಆಜ್ಞಾನುವರ್ತಿಯಾಗಿ, ಆತನ ಮತ್ತು ಆತನ ಸೃಷ್ಟಿಗಳ ಕರ್ತವ್ಯಗಳನ್ನು ಪೂರೈಸುವುದೇ ಮಾನವನ ಪ್ರಮುಖ ಹಾಗೂ ಮೂಲಭೂತ ನಡವಳಿಕೆಯಾಗಿದೆ.

## ಎಲ್ಲ ಪ್ರವಾದಿಗಳೂ ಮುಸ್ಲಿಮರು

ಎಲ್ಲ ಕಾಲಗಳಲ್ಲೂ ಮಾನವರಿಗೆ ಸದ್ವರ್ತನೆಯ ಮಾರ್ಗದರ್ಶನಕ್ಕಾಗಿ ದೇವನು ತನ್ನ ದೂತರು, ಪ್ರವಾದಿಗಳು ಅಥವಾ ಸಂದೇಶವಾಹಕರನ್ನು ಕಳುಹಿಸಿರುವನೆಂದು ಇಸ್ಲಾಮ್ ಹೇಳುತ್ತದೆ. ಪ್ರವಾದಿಗಳು ಅರೇಬಿಯಾದಲ್ಲಿ ಮಾತ್ರವಲ್ಲ ವಿವಿಧ ಕಾಲ, ವರ್ಗ ಮತ್ತು ದೇಶಗಳಲ್ಲಿ ಆಗತರಾಗಿದ್ದರು. ಆಯಾ ಜನಾಂಗದ ಭಾಷೆಗಳನ್ನೇ

ಅವರು ಮಾತನಾಡುತ್ತಿದ್ದರು. ಪ್ರಥಮ ಪ್ರವಾದಿ ಆದಮ್‌ರಿಂದ(ಅ) ತೊಡಗಿ ಅಂತಿಮ ಪ್ರವಾದಿ ಮುಹಮ್ಮದ್‌ರ(ಸ) ವರೆಗೆ ಅಸಂಖ್ಯಾತ ಪ್ರವಾದಿಗಳು ಬಂದಿದ್ದರು. ಅವರೆಲ್ಲರೂ ಇಸ್ಲಾಮ್ ಧರ್ಮವನ್ನು ಅರ್ಥಾತ್ ದೇವನಿಗೆ ಶರಣಾಗುವ ಸಂದೇಶವನ್ನು ಬೋಧಿಸಿ, ಕಾರ್ಯಗತ ಗೊಳಿಸಿ ಪ್ರಚಾರ ಮಾಡಿದರು. ತನ್ನಿಮಿತ್ತ ಅವರು ಮತ್ತು ಅವರ ಅನುಯಾಯಿಗಳೆಲ್ಲರೂ ತಂತಮ್ಮ ಕಾಲಗಳಲ್ಲಿ ಮುಸ್ಲಿಮ್ ಆಗಿದ್ದರು ಅರ್ಥಾತ್ ದೇವನಿಗೆ ಶರಣಾಗುವವರು.

## ಎಲ್ಲ ಪ್ರವಾದಿಗಳ ಮೇಲೆ ವಿಶ್ವಾಸ

ದೇಶ, ವಂಶ, ವರ್ಗ ವ್ಯತ್ಯಾಸವಿಲ್ಲದೆ ಎಲ್ಲ ಕಾಲಗಳ ಪ್ರವಾದಿಗಳ ಮೇಲೆ ವಿಶ್ವಾಸವಿರಿಸಿ ಅವರನ್ನು ಗೌರವಿಸಬೇಕಾದುದು ಮುಸ್ಲಿಮರ ಕಡ್ಡಾಯ ಕರ್ತವ್ಯವಾಗಿದೆ. ಯಥಾರ್ಥದಲ್ಲಿ ಮುಸ್ಲಿಮರು ದಿನದ ಐದು ಬಾರಿಯ ಪ್ರಾರ್ಥನೆಗಳಲ್ಲಿ ಸ್ವಯಂ ದೇವನ ಸಂಪ್ರೀತಿಯನ್ನು ಅಪೇಕ್ಷಿಸುವಾಗ ಸನ್ಮಾರ್ಗಿಗಳಾದ ಜನರ ಅರ್ಥಾತ್ ಪ್ರವಾದಿಗಳ ಮತ್ತು ಅವರ ಅನುಯಾಯಿಗಳ ಮೇಲೆ ಕೃಪೆ ತೋರಲಿಕ್ಕಾಗಿ ಕನಿಷ್ಠ ಪಕ್ಷ ಹದಿನೇಳು ಬಾರಿ ಬೇಡಿಕೊಳ್ಳುತ್ತಾರೆ.

ನಾವು ಪ್ರವಾದಿಗಳ ಮಧ್ಯೆ ಯಾವ ಭೇದಭಾವವನ್ನೂ ತೋರುವುದಿಲ್ಲ ಎಂದು ಕುರ್‌ಆನ್ ಹೇಳುತ್ತದೆ. ಎಲ್ಲ ಪ್ರವಾದಿಗಳ ಹೆಸರು ಕುರ್‌ಆನಿನಲ್ಲಿ ಪ್ರಸ್ತಾಪಿಸಿಲ್ಲವಾದರೂ ಅಂತಿಮ ಪ್ರವಾದಿ ಮತ್ತು ಅವರ ಅನುಯಾಯಿಗಳು ಅವರಿಗಿಂತ ಮುಂಚೆ ಬಂದ ಎಲ್ಲ ಪ್ರವಾದಿಗಳ ಮೇಲೆಯೂ ವಿಶ್ವಾಸವಿರಿಸುತ್ತಾರೆ. ಅಂತಿಮ ಪ್ರವಾದಿಯವರು ಎಲ್ಲ ಪೂರ್ವ ಪ್ರವಾದಿಗಳ ಬೋಧನೆಗಳನ್ನು ದೃಢೀಕರಿಸಿದ್ದರೇ ವಿನಾ ತಿರಸ್ಕರಿಸಿರಲಿಲ್ಲ. ಅಂತೆಯೇ ಎಲ್ಲ ಪ್ರವಾದಿಗಳು ಅಂತಿಮ ಪ್ರವಾದಿಯ ಆಗಮನದ ಕುರಿತು ಭವಿಷ್ಯ ನುಡಿದಿದ್ದರು.

ಕೊನೆಯ ಪ್ರವಾದಿಯ ಮೇಲೆ ವಿಶ್ವಾಸವಿರಿಸಬೇಕೆಂಬ ಕರಾರನ್ನು ದೇವನು ಎಲ್ಲ ಪ್ರವಾದಿಗಳಿಂದಲೂ ಅವರ ಅನುಯಾಯಿಗಳಿಂದಲೂ ಪಡೆದಿರುವನೆಂದು ಕುರ್‌ಆನಿನಲ್ಲಿ ಹೇಳಲಾಗಿದೆ. ಹಾಗೆಯೇ ಅಂತಿಮ ಪ್ರವಾದಿ ಮತ್ತು ಅವರ ಅನುಯಾಯಿಗಳಿಗೆ ಎಲ್ಲ ಪೂರ್ವ ಪ್ರವಾದಿಗಳ ಮೇಲೆ ವಿಶ್ವಾಸವಿರಿಸಬೇಕೆಂಬ ಆದೇಶವನ್ನೂ ನೀಡಲಾಗಿತ್ತು. ಆದ್ದರಿಂದ ಅಂತಿಮ ಪ್ರವಾದಿಯ ಆಗಮನದ

ಸುದ್ದಿಯನ್ನು ಎಲ್ಲ ಪ್ರವಾದಿಗಳೂ ಮುಂಚಿತವಾಗಿಯೇ ನುಡಿದಿದ್ದರು. ಅಂತಿಮ ಪ್ರವಾದಿಯವರು ಅವರೆಲ್ಲರನ್ನೂ ಸಮರ್ಥಿಸಿದರು.

ಕುರ್‌ಆನಿನಲ್ಲಿ ಈ ರೀತಿ ಹೇಳಲಾಗಿದೆ:

"ಓ ಸಂದೇಶವಾಹಕರೇ! ಶುದ್ಧವಾದ ವಸ್ತುಗಳನ್ನು ಭುಜಿಸಿರಿ ಮತ್ತು ಸತ್ಕರ್ಮಗಳನ್ನು ಕೈಕೊಳ್ಳಿರಿ. ನಿಸ್ಸಂದೇಹವಾಗಿಯೂ ನೀವು ಮಾಡುವುದನ್ನೆಲ್ಲಾ ನಾನು ಚೆನ್ನಾಗಿ ಅರಿಯುತ್ತೇನೆ. ನಿಶ್ಚಯವಾಗಿಯೂ ನಿಮ್ಮ ಈ ಸಮುದಾಯ ಒಂದೇ ಸಮುದಾಯವಾಗಿದೆ ಮತ್ತು ನಾನೇ ನಿಮ್ಮೆಲ್ಲರ ಪ್ರಭು. ಆದ್ದರಿಂದ ನನ್ನ ಭಯಭಕ್ತಿಯನ್ನಿರಿಸಿಕೊಳ್ಳಿರಿ" (23:51-52)

## ಜನರ ಏಕೀಕರಣವೇ ಇಸ್ಲಾಮಿನ ಧ್ಯೇಯ

ಪ್ರವಾದಿಗಳೆಲ್ಲರೂ ಒಂದೇ ಸಮುದಾಯಕ್ಕೆ ಸೇರಿದವರಾಗಿದ್ದು, ಒಂದೇ ಧರ್ಮವನ್ನು ಬೋಧಿಸಿ, ಅನುಸರಿಸಿ ಪ್ರಚಾರಗೊಳಿಸಿದ್ದರೆಂದು ಮೇಲಿನ ವಾಕ್ಯಗಳಿಂದ ತಿಳಿದುಬರುತ್ತದೆ. ಜನರನ್ನು ವಿಂಗಡಿಸುವ ಬದಲಾಗಿ ಒಂದುಗೂಡಿಸುವುದು ಇಸ್ಲಾಮಿನ ಧ್ಯೇಯವೆಂದು ಇದರಿಂದ ಸ್ಪಷ್ಟವಾಗುತ್ತದೆ.

## ಎಲ್ಲ ಗ್ರಂಥಗಳ ಮೇಲೂ ವಿಶ್ವಾಸ

ಪ್ರವಾದಿಗಳಿಗೆ ದಿವ್ಯ ಸಂದೇಶಗಳ ಮೂಲಕ ಶಿಕ್ಷಣ ನೀಡಲಾಯಿತು. ಅನೇಕ ಪ್ರವಾದಿಗಳಿಗೆ ಗ್ರಂಥಗಳು ನೀಡಲ್ಪಟ್ಟಿವೆ. ಆ ಪೈಕಿ ಕೆಲವನ್ನು ಮಾತ್ರ ಕುರ್‌ಆನಿನಲ್ಲಿ ಹೆಸರಿಸಲಾಗಿದೆ. ಓರ್ವನು ಮುಸ್ಲಿಮನಾಗಬೇಕಾದರೆ ಆ ಎಲ್ಲ ಗ್ರಂಥಗಳ ಮೇಲೂ ವಿಶ್ವಾಸವಿರಿಸಬೇಕು. ಅಂತಿಮ ಸಂದೇಶವಾಗಿರುವ ಕುರ್‌ಆನ್ ಗ್ರಂಥವು ಲೋಕದಾದ್ಯಂತ ವ್ಯಾಪಕವಾಗಿ ಓದಲ್ಪಡುತ್ತಿದೆ. ಇದು ಎಲ್ಲ ಪವಿತ್ರ ಗ್ರಂಥಗಳ ಸಮಾಹಾರವಾಗಿದ್ದು ಅವುಗಳಲ್ಲಿನ ಎಲ್ಲ ಮುಖ್ಯ ಹಾಗೂ ಮೂಲಭೂತ ವಿಷಯಗಳು ಇದರಲ್ಲಿ ಅಡಕವಾಗಿವೆ.

"ನಿಮಗಿದೋ ಈ ಗ್ರಂಥವನ್ನು ಸತ್ಯ ಸಹಿತ ನಾವು ಅವತೀರ್ಣಗೊಳಿಸಿರುತ್ತೇವೆ. ಇದು ಹಿಂದಿನ ಗ್ರಂಥಗಳನ್ನೆಲ್ಲ ದೃಢೀಕರಿಸುವಂತಹದ್ದಾಗಿದೆ". (5:48)

ಅಂತಿಮ ದಿವ್ಯ ಸಂದೇಶವಾಗಿರುವ ಕುರ್‌ಆನ್ ಅದಕ್ಕಿಂತ ಮುಂಚಿನ ಎಲ್ಲ

ಗ್ರಂಥಗಳನ್ನೂ ದೃಢೀಕರಿಸುತ್ತದೆ. ಕುರ್‌ಆನಿನಲ್ಲಿ ಇನ್ನೊಂದೆಡೆ ಈ ರೀತಿ ಹೇಳಿದೆ-

"ಇದೋ ಈ ಗ್ರಂಥ, ಇದನ್ನು ನಾವು ಅವತೀರ್ಣಗೊಳಿಸಿರುತ್ತೇವೆ. ಇದು ಕಲ್ಯಾಣಕಾರಕವೂ, ಹಿಂದಿನ ಗ್ರಂಥಗಳನ್ನು ದೃಢೀಕರಿಸುವಂತಹದ್ದೂ ಆಗಿದೆ." (6:92)

## ಪ್ರವಾದಿಗಳು ಪಾಪ ಮುಕ್ತರು

ಪವಿತ್ರ ಗ್ರಂಥಗಳಲ್ಲಿ ಹಸ್ತಕ್ಷೇಪ ನಡೆಸಿ ಅಥವಾ ಇತರ ರೀತಿಯಲ್ಲಿ ಮಾನವನಲ್ಲಿ ಮೂಡಿರುವ ತಪ್ಪು ತಿಳುವಳಿಕೆಗಳನ್ನು ಕುರ್‌ಆನ್ ಸರಿಪಡಿಸುತ್ತದೆ. ಕೆಲವು ಪ್ರವಾದಿಗಳನ್ನು ದೇವತ್ವಕ್ಕೆ ಏರಿಸಿ, ಇನ್ನು ಕೆಲವರನ್ನು ಅನೈತಿಕತೆಯ ಪಾತಾಳಕ್ಕೆ ತಳ್ಳಲಾಗಿದೆ. ಕುರ್‌ಆನ್ ಈ ಎರಡೂ ಆರೋಪಗಳನ್ನು ತಿರಸ್ಕರಿಸುತ್ತದೆ. ಮಾನವನಂತೆ ತಿನ್ನುವ, ನಿದ್ರಿಸುವ ಮತ್ತಿತರ ಮಾನವ ದೌರ್ಬಲ್ಯಗಳಿರುವಾತನು ದೇವನಾಗಲಾರ. ಅಲೌಕಿಕ ಶಕ್ತಿಗಳಿರುವ ದೇವನು ಮಾನವನಿಗೆ ಮಾದರಿಯಾಗಲೂ ಸಾಧ್ಯವಿಲ್ಲ. ಹಲವು ಗ್ರಂಥಗಳಲ್ಲಿ ಕೆಲವು ಪ್ರವಾದಿಗಳನ್ನು ದುರಾಚಾರಿಗಳೆಂದು ಆರೋಪಿಸಲಾಗಿದೆ. ಶಿವನಂಥ ಹಿಂದೂ ದೇವನನ್ನು ದುರಾಚಾರಿಯೆಂದು ಭಾವಿಸಲಸಾಧ್ಯವಾದರೂ ಮಹಾ ದುರಾಚಾರಿಯೆಂದು ದೂಷಿಸುತ್ತಾರೆ. ಅಂತೆಯೇ ಏಸುಕ್ರಿಸ್ತರ ಮಾತೆ ಮರ್ಯಮರನ್ನು ವ್ಯಭಿಚಾರಿಣಿಯೆಂದು ದೂಷಿಸುತ್ತಾರೆ. ಕುರ್‌ಆನ್ ಮರ್ಯಮ್, ಈಸಾ ಮತ್ತಿತರ ಪ್ರವಾದಿಗಳ ಮೇಲಿನ ಆರೋಪಗಳನ್ನು ತಳ್ಳಿ ಹಾಕಿದೆ. ಮರ್ಯಮರನ್ನು ಸದ್ಗುಣಸಂಪನ್ನೆಯೆಂದೂ ಈಸಾರನ್ನು ಗೌರವಾರ್ಹ ಪ್ರವಾದಿ ಮತ್ತು ದೇವನ ನಿಷ್ಠಾವಂತ ದಾಸರೆಂದೂ ಕುರ್‌ಆನ್ ಹೇಳುತ್ತದೆ. ಅಸಂಖ್ಯಾತರಾದ ಎಲ್ಲ ಪ್ರವಾದಿಗಳ ಬಗ್ಗೆ ಕುರ್‌ಆನಿನಲ್ಲಿ ಉಲ್ಲೇಖಿಸಿಲ್ಲವಾದರೂ ಪ್ರವಾದಿಗಳೆಲ್ಲರೂ ಪಾಪಮುಕ್ತರೆಂದು ಘೋಷಿಸುವ ಮೂಲಕ ಅವರ ಮೇಲೆ ಹೊರಿಸಲ್ಪಟ್ಟ ಆರೋಪಗಳನ್ನು ತಳ್ಳಿ ಹಾಕಿದೆ.

ತಪ್ಪು ತಿಳುವಳಿಕೆ, ಕಂದಾಚಾರ, ಮೂಢನಂಬಿಕೆಗಳನ್ನು ಹೋಗಲಾಡಿಸಿರುವುದು ಮತ್ತು ಪ್ರವಾದಿಗಳನ್ನು ಪಾಪಮುಕ್ತರೆಂದು ಘೋಷಿಸಿರುವುದು ಕುರ್‌ಆನಿನ ಅದ್ವಿತೀಯ ವೈಶಿಷ್ಟ್ಯವಾಗಿದೆ. ಈ ರೀತಿ ಕುರ್‌ಆನ್ ಹಿಂದಿನ ಎಲ್ಲ ದಿವ್ಯ ಸಂದೇಶಗಳನ್ನು ಸಂರಕ್ಷಿಸುತ್ತದೆ:

"ನಿಮಗಿದೋ ಈ ಗ್ರಂಥವನ್ನು ಸತ್ಯ ಸಹಿತ ನಾವು ಅವತೀರ್ಣಗೊಳಿಸಿರುತ್ತೇವೆ.

ಇದು ಹಿಂದಿನ ಗ್ರಂಥಗಳನ್ನೆಲ್ಲ ದೃಢೀಕರಿಸುವಂತಹದ್ದಾಗಿದೆ". (5:48)

ಲೋಕದ ಎಲ್ಲ ಪ್ರವಾದಿಗಳಲ್ಲಿ ಮತ್ತು ಸತ್ಯಮಾನ್ಯ ದಿವ್ಯ ಗ್ರಂಥಗಳಲ್ಲಿರುವ ವಿಶ್ವಾಸವು ಇಸ್ಲಾಮಿನ ವೈಶಿಷ್ಟ್ಯವಾಗಿದೆ. ಆದ್ದರಿಂದ ದೇವನು ಯಾವುದೇ ರಾಷ್ಟ್ರಕ್ಕೆ ನೀಡಿದ ಸತ್ಯ ಅಥವಾ ಯಾವುದೇ ಪ್ರವಾದಿಯ ಉತ್ತಮ ಗುಣ-ನಡತೆಗಳನ್ನು ಖಂಡಿತವಾಗಿಯೂ ಅದು ಕಳಕೊಂಡಿಲ್ಲವೆಂದು ದೃಢವಾಗಿ ಹೇಳಬಹುದು.

ಎಲ್ಲ ಪ್ರವಾದಿಗಳಲ್ಲಿ ಮತ್ತು ಗ್ರಂಥಗಳಲ್ಲಿರುವ ಏಕಪ್ರಕಾರದ ವಿಶ್ವಾಸವು ಧರ್ಮವು ಅನೇಕ ಇರುವ ಬದಲಾಗಿ ಸದಾ ಒಂದೇ ಆಗಿತ್ತೆಂಬ ಒಮ್ಮತದ ತೀರ್ಮಾನಕ್ಕೆ ನಮ್ಮನ್ನು ಕೊಂಡೊಯ್ಯುತ್ತದೆ. ಆ ಧರ್ಮವು ನಮ್ಮ, ನಿಮ್ಮ ಹಾಗೂ ಎಲ್ಲರ ಒಡೆಯನಿಗೆ ಶರಣಾಗಬೇಕೆಂಬ ಉದಾತ್ತ ಬೋಧನೆಯನ್ನು ಹೊಂದಿರುವ ಇಸ್ಲಾಮ್ ಅಲ್ಲದೆ ಇನ್ನಾವುದೂ ಅಲ್ಲ. ಆದ್ದರಿಂದ ಇಸ್ಲಾಮ್ ಧರ್ಮವು ಸಾರ್ವತ್ರಿಕ, ಜಾಗತಿಕ, ಸನಾತನ ಹಾಗೂ ಚಿರನೂತನ ಧರ್ಮವಾಗಿದೆ.

## ವಿಧಿ ನಿರ್ಣಾಯಕ ದಿನ ಅವಶ್ಯ

ದೇವನು ಒಂದು ವಿಶಿಷ್ಟ ಉದ್ದೇಶಕ್ಕಾಗಿ ಪ್ರವಾದಿಗಳನ್ನು ಕಳುಹಿಸಿಕೊಟ್ಟನು. ಜನರನ್ನು ಪುನಃ ಜೀವಂತಗೊಳಿಸಿ ಅವರ ಕರ್ಮಾನುಸಾರ ಪ್ರತಿಫಲ ಅಥವಾ ಶಿಕ್ಷೆಗಳನ್ನು ನೀಡುವ ನ್ಯಾಯದಾನ ದಿನದ ಬಗ್ಗೆ ಅಜ್ಞರಾಗಿರದೆ, ದಿವ್ಯ ಮಾರ್ಗದರ್ಶನದಂತೆ ಜೀವನ ನಡೆಸಲಿಕ್ಕಾಗಿ ಒಳಿತು-ಕೆಡುಕು, ಪಾಪ-ಪುಣ್ಯ, ಸದಾಚಾರ-ದುರಾಚಾರಗಳ ಬಗ್ಗೆ ಪ್ರವಾದಿಗಳು ತಿಳುವಳಿಕೆ ನೀಡಿದರು. ದೇವನು ಮಾನವನಿಗೆ ಜೀವನದ ಎಲ್ಲ ಸೌಲಭ್ಯಗಳನ್ನು ಒದಗಿಸಿಕೊಟ್ಟಿರುವ ಹಿನ್ನೆಲೆಯಲ್ಲಿ ಅದರ ಬಳಕೆ ಮತ್ತು ಅವನ ವರ್ತನೆಗಳ ಬಗ್ಗೆ ಅವಲೋಕನ ನಡೆಸಲಿಕ್ಕಾಗಿ ವಿಧಿ ನಿರ್ಣಾಯಕ ದಿನವೊಂದನ್ನು ನಿಶ್ಚಯಿಸಿರುವುದು ನೈತಿಕ ಆವಶ್ಯಕತೆಯಾಗಿದೆ. ಕುರ್‌ಆನಿನಲ್ಲಿ ಸತ್ಕರ್ಮಿಗಳಿಗೆ ಶಾಶ್ವತ ಸುಖ-ಸಂತೋಷದ ವಾಗ್ದಾನವನ್ನು ಮಾಡಲಾಗಿದೆ. ದುಷ್ಕರ್ಮಿಗಳಿಗೆ ಶಾಶ್ವತ ಯಾತನೆಯ ಎಚ್ಚರಿಕೆ ನೀಡಲಾಗಿದೆ.

## ದೇವ ದರ್ಶನದ ಸೌಭಾಗ್ಯವಂತರು

ಪರಲೋಕ ವಿಶ್ವಾಸಿಯಾದ ಓರ್ವ ಸಜ್ಜನ ವ್ಯಕ್ತಿಯು ಮರಣಾಸನ್ನನಾಗುವಾಗ

ಈ ಹಿಂದೆ ಗತಿಸಿದ ತನ್ನ ಆಪ್ತೇಷ್ಟರನ್ನು ಭೇಟಿಯಾಗುವ ಅವಕಾಶ ತನಗೆ ದೇವಾನುಗ್ರಹದಿಂದ ದೊರೆಯುವುದೆಂದು ಸಂತೃಪ್ತಿ ತಾಳುತ್ತಾನೆ. ಅವನು ಅಲ್ಲಿ ಅವರನ್ನು ಭೇಟಿಯಾಗಿ ದುಃಖ-ದುಮ್ಮಾನ, ರೋಗ-ರುಜಿನ, ಮರಣಗಳಿಲ್ಲದಂಥ ಶಾಶ್ವತ ಹಾಗೂ ಅನುಪಮ ಸುಖ ಸಂತೋಷದ ಬಾಳ್ವೆಯನ್ನು ಸಾಗಿಸುತ್ತಾನೆ. ತನಗೆ ಅಪರಿಚಿತರಾಗಿದ್ದ ಪೂರ್ವಕಾಲದ ಮಹಾಪುರುಷರ, ಪ್ರವಾದಿಗಳ ಹಾಗೂ ಪುಣ್ಯ ಹುತಾತ್ಮರ ಸಹವಾಸದಲ್ಲಿ ಜೀವಿಸುತ್ತಾನೆ. ಎಲ್ಲಕ್ಕಿಂತ ಮಿಗಿಲಾಗಿ ಈ ಲೋಕದಲ್ಲಿ ಪೂರ್ಣಚಂದ್ರನನ್ನು ನೋಡುವಂತೆ ಆತನು ದೇವನ ಮುಖ ದರ್ಶನವನ್ನು ಪಡೆಯುತ್ತಾನೆ. ಅದೊಂದು ಸೌಭಾಗ್ಯವೇ ಆಗಿರುವುದು.

## ವಿಶ್ವಾಸ ಮತ್ತು ಸತ್ಕರ್ಮ

ಈ ರೀತಿ ಇಸ್ಲಾಮ್ ಧರ್ಮವು ವಿಶ್ವಾಸ ಮತ್ತು ಸತ್ಕರ್ಮಗಳನ್ನೊಳಗೊಂಡಿದೆ. ದೇವನಲ್ಲಿ, ಎಲ್ಲ ಪ್ರವಾದಿಗಳಲ್ಲಿ, ಎಲ್ಲ ಗ್ರಂಥಗಳಲ್ಲಿ ಮತ್ತು ನ್ಯಾಯದಾನದ ದಿನದಲ್ಲಿ ವಿಶ್ವಾಸವಿಡುವುದರೊಂದಿಗೆ ದೇವಾಜ್ಞೆಯಂತೆ ವಿಶ್ವದ ಕಾರ್ಯಗಳನ್ನು ನೆರವೇರಿಸುವ ಅಗೋಚರ ಅಸ್ತಿತ್ವಗಳಾದ ದೇವಚರರಲ್ಲಿಯೂ ವಿಶ್ವಾಸವಿಡಬೇಕೆಂದು ಇಸ್ಲಾಮ್ ಆಜ್ಞಾಪಿಸುತ್ತದೆ. ಜಿಬ್ರೀಲ್(ಅ) ಎಂಬ ಪ್ರಮುಖ ದೇವದೂತರು ಪ್ರವಾದಿಗಳಿಗೆ ದಿವ್ಯ ಸಂದೇಶವನ್ನು ತಲುಪಿಸಿದರು. ಮಾನವನ ಮಾತು-ಕೃತಿಗಳನ್ನು ಬರೆದಿಡಲಿಕ್ಕಾಗಿ ಈರ್ವರು ದೇವಚರರು ಪ್ರತಿಯೋರ್ವ ಮಾನವನ ಜೊತೆಗಿದ್ದಾರೆ. ಈ ದಾಖಲೆ ಪತ್ರವು ನ್ಯಾಯದಾನದ ದಿನದಂದು ಸಮರ್ಪಿಸಲ್ಪಟ್ಟು ಪ್ರತಿಯೊಬ್ಬರಿಗೂ ಅವರವರ ಕರ್ಮಫಲಗಳಿಗನುಸಾರ ಪುರಸ್ಕಾರ ಅಥವಾ ಶಿಕ್ಷೆ ನೀಡಲಾಗುವುದು.

## ಸತ್ಕರ್ಮ ಯಾವುದು?

ದೇವನ ಸಂಪ್ರೀತಿಗಾಗಿ ಆತನ ಆಜ್ಞೆಯಂತೆ ನಿರ್ವಹಿಸುವ ಎಲ್ಲವೂ ಸತ್ಕರ್ಮವಾಗಿದ್ದು ಪುಣ್ಯದಾಯಕವಾಗಿದೆ. ಇದು ದೇವನ ದಾಸ್ಯ ಮತ್ತು ಸೃಷ್ಟಿ ಸೇವೆಯನ್ನೊಳಗೊಂಡಿದೆ. ದಿನಂಪ್ರತಿ ಐದು ಬಾರಿ ನಮಾಝ್, ಒಂದು ತಿಂಗಳ ಉಪವಾಸ ವ್ರತ, ಝಕಾತ್ ವಿತರಣೆ(ನಿರ್ದಿಷ್ಟ ಮೊತ್ತಕ್ಕಿಂತ ಹೆಚ್ಚು ಸಂಪತ್ತಿರುವವರು ವರ್ಷಂಪ್ರತಿ ನೀಡುವ ಈ ದಾನವು ಉತ್ತಮ ಸಾಮಾಜಿಕ ವಿಮೆಯೆನಿಸುತ್ತದೆ) ಮತ್ತು

ಜೀವನದಲ್ಲೊಂದು ಬಾರಿ ಸಾಧ್ಯವಿದ್ದರೆ ಹಜ್ಜ್ ಯಾತ್ರೆ ಕೈಗೊಳ್ಳುವುದು. ಇವು ದೇವನಿಗಾಗಿ ನಿರ್ವಹಿಸಬೇಕಾದ ಕಡ್ಡಾಯ ಕರ್ತವ್ಯಗಳಾಗಿವೆ.

ಇವುಗಳ ಹೊರತಾಗಿ ಮಾನವನು ದೇವನ ಸೃಷ್ಟಿಗಳ ಸೇವೆ ಮಾಡುವ ತನ್ನ ಕರ್ತವ್ಯವನ್ನೂ ನಿರ್ವಹಿಸಬೇಕು. ಪ್ರಪ್ರಥಮವಾಗಿ ತನ್ನ ಹೆತ್ತವರ ಮತ್ತು ಬಂಧು ಬಳಗದವರ ಸೇವೆ ಮಾಡಬೇಕು. ಅದರೊಂದಿಗೆ ನೆರೆಕರೆಯವರಿಗೆ, ಬಡಬಗ್ಗರಿಗೆ, ಸಹೋದ್ಯೋಗಿಗಳಿಗೆ ಒಳಿತನ್ನೇ ಮಾಡಬೇಕು. ಮಾನವರೊಂದಿಗೆ ಮಾತ್ರವಲ್ಲ ಎಲ್ಲ ಪ್ರಾಣಿಗಳೊಂದಿಗೂ ಒಳ್ಳೆಯ ರೀತಿಯಲ್ಲಿ ವರ್ತಿಸಬೇಕು.

## ಉತ್ತಮ ಲೋಕ

ಓರ್ವ ಸತ್ಯವಿಶ್ವಾಸಿಯು ಪರಲೋಕದ ಯಶಸ್ಸಿಗಾಗಿ ಈ ಲೋಕದಲ್ಲಿ ಶ್ರಮಪಡಬೇಕು. ಅದಕ್ಕಾಗಿ ಅವನು ಈ ಲೋಕವನ್ನು ಮತ್ತು ಅದರ ನ್ಯಾಯಬದ್ಧ ಸುಖ-ಸಂತೋಷವನ್ನು ಪರಿತ್ಯಜಿಸಬೇಕಾಗಿಲ್ಲ. ಮಾನವನು ಈ ನಶ್ವರ ಲೋಕಕ್ಕಿಂತ ಶಾಶ್ವತವಾದ ಪರಲೋಕವನ್ನೇ ಹೆಚ್ಚಾಗಿ ಆಗ್ರಹಿಸಬೇಕೆಂದು ದೇವನು ಇಚ್ಛಿಸುತ್ತಾನೆ. ಪರಲೋಕದ ಸುಖಕ್ಕೆ ಹೋಲಿಸಿದಾಗ ಲೌಕಿಕ ಸುಖವು ತಾತ್ಕಾಲಿಕ ಮತ್ತು ತುಚ್ಛವಾಗಿದೆ. ಆದ್ದರಿಂದ ಮಾನವನು ಈ ಲೋಕದಲ್ಲಿ ಶಾಶ್ವತ ಪರಲೋಕ ಸುಖಕ್ಕೆ ಪೂರಕವಾದ ಆಧ್ಯಾತ್ಮಿಕ ಮತ್ತು ನೈತಿಕ ಮೌಲ್ಯಗಳನ್ನೊಳಗೊಂಡ ನ್ಯಾಯಬದ್ಧ ಸುಖವನ್ನು ಮಾತ್ರ ಇಚ್ಛಿಸಬೇಕು. ಪರಲೋಕದಲ್ಲಿ ಶಿಕ್ಷೆಗೆ ಪಾತ್ರವಾಗುವಂತಹ ಲೌಕಿಕ ಸುಖಗಳಿಂದ ದೂರವಿರಬೇಕು. ಓರ್ವ ಮುಸ್ಲಿಮನ ಪ್ರಾರ್ಥನೆಯು ಸದಾ ಹೀಗಿರಬೇಕೆಂದು ಕುರ್‌ಆನ್ ಹೇಳಿದೆ: "ನಮ್ಮ ಪ್ರಭೂ, ನಮಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಒಳಿತನ್ನೇ ಅನುಗ್ರಹಿಸು. ನರಕಾಗ್ನಿಯ ಶಿಕ್ಷೆಯಿಂದ ನಮ್ಮನ್ನು ರಕ್ಷಿಸು".(2:201) ಈ ರೀತಿ ಮುಸ್ಲಿಮನು ಉಭಯ ಲೋಕಗಳಲ್ಲಿಯೂ ಒಳಿತನ್ನೇ ಆಗ್ರಹಿಸುತ್ತಾನೆ!

## ಎಲ್ಲ ಕಾರ್ಯಗಳ ನಿಯಂತ್ರಣ

ಇಸ್ಲಾಮ್ ಕೇವಲ ಕೆಲವು ಆಚಾರ-ವಿಚಾರ ಮತ್ತು ನೈತಿಕ ಆದೇಶಗಳ ಸಮಾಹಾರವಾಗಿರದೆ ಮಾನವ ಜೀವನದ ಧಾರ್ಮಿಕ, ನೈತಿಕ, ಆಧ್ಯಾತ್ಮಿಕ, ಶೈಕ್ಷಣಿಕ,

ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯಕ್ಕೆ ಸಂಬಂಧಿಸಿದ ಎಲ್ಲ ರಂಗಗಳನ್ನೂ ನಿಯಂತ್ರಿಸುತ್ತಿರುವುದು ಅದರ ಇನ್ನೊಂದು ವೈಶಿಷ್ಟ್ಯವಾಗಿದೆ. ನ್ಯಾಯ ತೀರ್ಮಾನದ ದಿನದಂದು ಮಾನವನು ಜೀವನದ ಎಲ್ಲ ವರ್ತನೆಗಳ ಬಗೆಗೂ ಜವಾಬ್ದಾರನಾಗಿ ರುವುದರಿಂದ ಆತನ ಜೀವನಕ್ಕೆ ಸಂಬಂಧಿಸಿದ ಎಲ್ಲ ರಂಗಗಳ ಬಗ್ಗೆಯೂ ಸ್ಪಷ್ಟ ನಿರ್ದೇಶನಗಳನ್ನು ಇಸ್ಲಾಮ್ ನೀಡಿದೆ. ಪ್ರವಾದಿಗಳು ಮತ್ತು ಅವರ ಅನುಯಾಯಿಗಳು ಜೀವನದ ಎಲ್ಲ ರಂಗಗಳಲ್ಲಿಯೂ ಧರ್ಮವನ್ನು ಅರ್ಥಾತ್ ದಿವ್ಯ ಸಂದೇಶವನ್ನು ಅನುಸರಿಸುತ್ತಿದ್ದರೆಂದು ಉಲ್ಲೇಖಿತ ಪ್ರವಾದಿಗಳ ಜೀವನ ಚರಿತ್ರೆಗಳಿಂದ ತಿಳಿದು ಬರುತ್ತದೆ.

ಅಂತಿಮ ಪ್ರವಾದಿಯವರ(ಸ) ಕಾರ್ಯಭಾರವು ಮಸೀದಿಯಲ್ಲಿನ ನಮಾಝ್‌ನ ನೇತೃತ್ವ ವಹಿಸುವುದಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಅವರು ಏಕಕಾಲದಲ್ಲಿ ಆಧ್ಯಾತ್ಮಿಕ ಗುರು, ನೈತಿಕ ಮಾರ್ಗದರ್ಶಕ, ನ್ಯಾಯಾಧಿಪತಿ, ರಾಜನೀತಿಜ್ಞ, ಸೇನಾಧಿಕಾರಿ ಮತ್ತು ಆಡಳಿತಗಾರನೆಂಬ ನೆಲೆಯಲ್ಲಿ ನೈತಿಕ ಮತ್ತು ಆಧ್ಯಾತ್ಮಿಕ ಮೌಲ್ಯಗಳ ವಾಹಕರಾಗಿದ್ದರು. ಮಾನವ ಜೀವನದ ಎಲ್ಲ ರಂಗಗಳಲ್ಲಿಯೂ ಅಂತಿಮ ಪ್ರವಾದಿಯಲ್ಲಿ ನಿಮಗೆ ಉತ್ತಮ ಮಾದರಿಯಿದೆಯೆಂದು ಕುರ್‌ಆನ್ ಹೇಳುತ್ತದೆ.

ಇಸ್ಲಾಮಿನಲ್ಲಿ ಧರ್ಮ ಮತ್ತು ರಾಜಕೀಯ ವಿಭಿನ್ನವಲ್ಲವೆಂದು ಇದರಿಂದ ವ್ಯಕ್ತವಾಗುತ್ತದೆ. ರಾಜಕೀಯ ಮತ್ತು ಆರ್ಥಿಕ ವ್ಯವಹಾರಗಳೂ ದೇವಾಜ್ಞೆಗೆ ಅಧೀನವಾಗಿವೆ.

## ಇಸ್ಲಾಮೀ ರಾಜಕೀಯದ ಮೂರು ಸ್ತಂಭಗಳು

ಇಸ್ಲಾಮೀ ರಾಜಕೀಯದಲ್ಲಿ ಸಾರ್ವಭೌಮತೆಯು ದೇವನಿಗೇ ಸಲ್ಲುವುದು. ಸರ್ವೋತ್ಕೃಷ್ಟ ಸೃಷ್ಟಿಯೆಂದು ಪರಿಗಣಿಸಲ್ಪಟ್ಟಿರುವ ಮಾನವನು ವಿಶ್ವದಲ್ಲಿ ಅತಿ ಶ್ರೇಷ್ಠನಾಗಿದ್ದು ಈ ಲೋಕದಲ್ಲಿ ದೇವನ ಪ್ರತಿನಿಧಿಯಾಗಿದ್ದಾನೆ. ಆದ್ದರಿಂದ ಈ ಲೋಕದಲ್ಲಿ ದೇವಾಜ್ಞೆ ಮತ್ತು ಅದಕ್ಕನುಗುಣವಾದ ನೀತಿಯಿಂದ ಸತ್ಯ ಮತ್ತು ನ್ಯಾಯಗಳನ್ನು ಸಂಸ್ಥಾಪಿಸುವುದು ಅವನ ಜೀವನದ ಕರ್ತವ್ಯವಾಗಿದೆ. ದೇವನ ಸಾರ್ವಭೌಮತ್ವ, ಮಾನವನ ಪ್ರಾತಿನಿಧ್ಯ ಮತ್ತು ದೇವಾಜ್ಞೆಗಳಿಗೆ ಪ್ರಾಮುಖ್ಯ ಎಂಬೀ

ಮೂರು ಆಧಾರ ಸ್ಥಂಭಗಳಲ್ಲಿ ಇಸ್ಲಾಮಿನ ರಾಜಕೀಯ ಪದ್ಧತಿಯು ನೆಲೆನಿಂತಿದೆ.

ಅದೇ ರೀತಿ ಇಸ್ಲಾಮಿ ಆರ್ಥಿಕ ನೀತಿಯಲ್ಲಿ ಭಂಡವಾಳಶಾಹಿಯ ಬೆನ್ನೆಲುಬಾಗಿರುವ ಬಡ್ಡಿ ವ್ಯವಹಾರ, ದುಂದುವೆಚ್ಚ ಮತ್ತು ಏಕಸ್ವಾಮ್ಯಗಳಿಗೆ ಅವಕಾಶವಿಲ್ಲ. ಅಂತೆಯೇ ಸಮತಾವಾದ ಮತ್ತು ಸಮಾಜವಾದದಂತೆ ಓರ್ವ ವ್ಯಕ್ತಿಯ ಅನುಮತಿ ಅಥವಾ ಒಪ್ಪಿಗೆಯಿಲ್ಲದೆ ಆತನ ನ್ಯಾಯಬದ್ಧ ಸೊತ್ತನ್ನು ಕಸಿದು ಇತರರಿಗೆ ನೀಡುವಂತಿಲ್ಲ.

## ಭ್ರಾತೃತ್ವ ಮತ್ತು ಸಮಾನತೆ

ಸಾಮಾಜಿಕ ಜೀವನದಲ್ಲಿ ಮದ್ಯಪಾನ ಮತ್ತು ಜೂಜಿಗೆ ಯಾವ ಸ್ಥಾನವನ್ನೂ ಇಸ್ಲಾಮ್ ನೀಡುವುದಿಲ್ಲ. ಭಾರತೀಯ ಸಂವಿಧಾನದ ಕನಸಾಗಿಯೇ ಉಳಿದಿರುವ ಮದ್ಯಪಾನ ನಿಷೇಧವನ್ನು ಇಸ್ಲಾಮ್ ವಾಸ್ತವಿಕತೆಯಾಗಿ ಮಾರ್ಪಡಿಸಿದೆ. ನಮ್ಮ ಸಂವಿಧಾನಕರ್ತರು ಶಾಸನದ ಮೂಲಕ ನಿವಾರಿಸ ಬಯಸಿ ವಿಫಲವಾಗಿರುವ ಅಸ್ಪೃಶ್ಯತೆ, ಅಸಮಾನತೆಗಳನ್ನು ಇಸ್ಲಾಮ್ ಹೋಗಲಾಡಿಸಿದೆ. ದಿನಂಪ್ರತಿ ಮಸೀದಿಗಳಲ್ಲಿ ಜರಗುವ ಐದು ಬಾರಿಯ ನಮಾಝ್ ಮತ್ತು ಈದ್ ಪ್ರಾರ್ಥನೆಗಳಲ್ಲಿ ಇಸ್ಲಾಮಿನ ಸಮಾನತೆ ಮತ್ತು ಭ್ರಾತೃತ್ವವನ್ನು ದರ್ಶಿಸಬಹುದು. ಇಸ್ಲಾಮಿನ ಭ್ರಾತೃತ್ವ ಮತ್ತು ಸಮಾನತೆಯ ಪ್ರತ್ಯಕ್ಷ ವಿಶ್ವದರ್ಶನವನ್ನು ವರ್ಷಂಪ್ರತಿ ನಾನಾ ದೇಶಗಳ, ವಿವಿಧ ಕುಲ-ಗೋತ್ರಗಳ ಜನರು ಹೊಲಿಗೆಯಿಲ್ಲದ ಬಿಳಿ ಸಾಮಾನ್ಯ ಸಮವಸ್ತ್ರದಲ್ಲಿ ಹಜ್ಜ್‌ಗಾಗಿ ಒಟ್ಟು ಸೇರಿದಾಗ ಕಾಣಬಹುದಾಗಿದೆ. ಯಥಾರ್ಥದಲ್ಲಿ ಇಸ್ಲಾಮ್ ಧರ್ಮವು ದೇವನ ಆಧಿಪತ್ಯದಲ್ಲಿ ಎಲ್ಲರೂ ಸಮಾನರೆಂಬ ನೆಲೆಯಲ್ಲಿ ವಿಶ್ವಭ್ರಾತೃತ್ವ ಕಲ್ಪನೆಯನ್ನು ಹೊಂದಿದೆ.

ಉನ್ನತ ನೈತಿಕ ಶಿಕ್ಷಣದ ಜತೆಗೆ ಸಾಮಾಜಿಕ ಜೀವನವನ್ನು ನಿಯಂತ್ರಿಸುವುದೂ ಇಸ್ಲಾಮಿನ ಪ್ರಮುಖ ವೈಶಿಷ್ಟ್ಯವಾಗಿದೆ. ಸಾಮಾಜಿಕ ನಿಯಮಗಳನ್ನು ಕುರ್‌ಆನಿನಲ್ಲಿ ಈ ರೀತಿ ವಿವರಿಸಲಾಗಿದೆ.

"ಓ ಸತ್ಯವಿಶ್ವಾಸಿಗಳೇ! ಕರ್ಮಭ್ರಷ್ಟನಾದವನೊಬ್ಬನು ನಿಮ್ಮ ಬಳಿಗೆ ಒಂದು ಸುದ್ದಿಯನ್ನು ತಂದರೆ ಅದನ್ನು ಸೂಕ್ಷ್ಮವಾಗಿ ಪರಾಂಬರಿಸಿ ನೋಡಿರಿ. ಇಲ್ಲವಾದರೆ ಅಜ್ಞಾನದಿಂದ ನೀವು ಒಂದು ಜನಾಂಗದ ಜತೆ ಅನರ್ಥ ಮಾಡಿಕೊಂಡು ಅನಂತರ

ನಿಮ್ಮ ಕೃತ್ಯದ ಬಗ್ಗೆ ನೀವೇ ಪಶ್ಚಾತ್ತಾಪ ಪಡುವಂತಾಗಬಹುದು."(49:6) ಮುಂದುವರಿದು ಕುರ್‌ಆನ್ ಹೀಗೆ ಹೇಳುತ್ತದೆ: " ಸತ್ಯ ವಿಶ್ವಾಸಿಗಳ ಎರಡು ತಂಡಗಳು ಪರಸ್ಪರ ಜಗಳ ಮಾಡಿದರೆ ಅವರ ನಡುವೆ ಸಂಧಾನ ಮಾಡಿಸಿರಿ. ಅವರಲ್ಲೊಂದು (ತಂಡ) ಇನ್ನೊಂದರ ಮೇಲೆ ಅತಿರೇಕವೆಸಗಿದರೆ, ಅಲ್ಲಾಹನ ಆಜ್ಞೆಗೆ ಅವರು ಮರಳುವವರೆಗೂ ಅತಿರೇಕವೆಸಗಿದವರ ವಿರುದ್ಧ ನೀವು ಹೋರಾಡಿರಿ. ಮುಂದೆ ಹಾಗೆ ಅವರು ಮರಳಿದರೆ, ಆ ಎರಡು ತಂಡಗಳೊಳಗೆ ನ್ಯಾಯದೊಂದಿಗೆ ಸಂಧಾನ ಮಾಡಿಸಿರಿ ಮತ್ತು ನ್ಯಾಯ ಪಾಲಿಸಿರಿ. ನಿಸ್ಸಂದೇಹವಾಗಿಯೂ ನ್ಯಾಯ ಪಾಲಿಸುವವರನ್ನು ಅಲ್ಲಾಹನು ಪ್ರೀತಿಸುತ್ತಾನೆ." (49:9)

ಇಸ್ಲಾಮಿನ ಈ ಆದೇಶಗಳಿಗೆ ಹದಿನಾಲ್ಕು ಶತಮಾನಗಳೇ ಸಂದಿವೆ. ಆದರೆ ಶಾಂತಿಗೆ ಬೆದರಿಕೆಯೊಡ್ಡುವ ಆಕ್ರಮಣ ಹಾಗೂ ದೌರ್ಜನ್ಯಗಳನ್ನು ನಿಯಂತ್ರಿಸುವಂತಹ ಸನದನ್ನು ವಿಶ್ವಸಂಸ್ಥೆಯು ಮೂರು-ನಾಲ್ಕು ದಶಕಗಳ ಹಿಂದೆಯಷ್ಟೇ ಅಳವಡಿಸಿಕೊಂಡಿತು. ಯಥಾರ್ಥದಲ್ಲಿ ಇಸ್ಲಾಮೀ ತತ್ವಗಳಿಂದ ಅನೇಕ ರಾಷ್ಟ್ರಗಳಿಗೆ ಪ್ರಯೋಜನವಾಗಿದೆ. ಅವು ಹೆಚ್ಚೆಚ್ಚು ಜನಪ್ರಿಯವಾಗುತ್ತಿವೆ. ಬಹುದೇವ ಸಿದ್ಧಾಂತದ ಸ್ಥಾನದಲ್ಲಿ ಏಕದೇವ ಸಿದ್ಧಾಂತ ಪ್ರಚಾರ ಪಡೆಯುತ್ತಿದೆ.

## ಇತಿಹಾಸದ ತೀರ್ಪು

ಪ್ರವಾದಿಗಳ ಬೋಧನೆಗಳಂತೆ ದಿವ್ಯ ಮಾರ್ಗದರ್ಶನದಲ್ಲಿ ಜೀವಿಸಿದವರು ಈ ಲೋಕದ ಸುಖ-ಸಮೃದ್ಧಿಗೆ ಕಾರಣರಾಗಿದ್ದರೆಂಬುದಕ್ಕೆ ಚರಿತ್ರೆಯು ಸಾಕ್ಷಿಯಾಗಿದೆ. ಈ ನಿಟ್ಟಿನಲ್ಲಿ ಅಂತಿಮ ಪ್ರವಾದಿಯವರ ಅನುಯಾಯಿಗಳ ಚರಿತ್ರೆಯು ಸಾಮಾನ್ಯವಾಗಿ ಅದರ ಇತ್ತೀಚೆಗಿನ ನಿದರ್ಶನವಾಗಿದೆ. ದಿವ್ಯ ಸಂದೇಶಗಳಿಗೆ ಅವಿಧೇಯರಾಗಿ ತಂತಮ್ಮ ಕಾಲದ ಪ್ರವಾದಿಗಳನ್ನು ಧಿಕ್ಕರಿಸಿದ ಫರೋವಾ, ನಮ್ರೂದ್ ಮತ್ತು ಸೊದೋಮ್‌ರ(Sodom) ದುರ್ಗತಿಯ ಇತಿಹಾಸವು ದೇವಾಜ್ಞೆಯನ್ನು ಧಿಕ್ಕರಿಸುವ ಜನರ ಕಣ್ಣು ತೆರೆಸಲು ಪರ್ಯಾಪ್ತವಿದೆ.

## ಧರ್ಮದಲ್ಲಿ ಬಲಾತ್ಕಾರವಿಲ್ಲ

ಧರ್ಮವನ್ನು ಸ್ವೀಕರಿಸುವಂತೆ ಜನರನ್ನು ಬಲಾತ್ಕರಿಸಬೇಕೆಂದು ಇದರ

ಅರ್ಥವಲ್ಲ. ಕುರ್‌ಆನಿನಲ್ಲಿ ಈ ರೀತಿ ಹೇಳಲಾಗಿದೆ:

"ಧರ್ಮದಲ್ಲಿ ಒತ್ತಾಯವಿಲ್ಲ. ಸನ್ಮಾರ್ಗವು ದುರ್ಮಾರ್ಗದಿಂದ ಸುಸ್ಪಷ್ಟವಾಗಿ ಬೇರ್ಪಟ್ಟಿದೆ. ಆದ್ದರಿಂದ ತಾಗೂತನ್ನು(ದೇವೇತರ ಶಕ್ತಿ) ನಿಷೇಧಿಸುವವನು ಹಾಗೂ ಅಲ್ಲಾಹನಲ್ಲಿ ವಿಶ್ವಾಸವಿಡುವವನು ಎಂದೆಂದಿಗೂ ಮುರಿಯದಂತಹ ಬಲವಾದ ಪಾಶವನ್ನು ಹಿಡಿದುಕೊಂಡನು. ಅದೆಂದೂ ಮುರಿದು ಬೀಳುವಂತಿಲ್ಲ."(2:256) "ನಿಮಗೆ ನಿಮ್ಮ ಧರ್ಮ ಮತ್ತು ನನಗೆ ನನ್ನ ಧರ್ಮ" ಎಂದೂ ಕುರ್‌ಆನ್ ಬೋಧಿಸುತ್ತದೆ. ಇಸ್ಲಾಮ್ ಅತ್ಯಂತ ಸಹಿಷ್ಣುತೆಯ ಧರ್ಮವಾಗಿದೆ. ಬಹುದೇವಾರಾಧಕರ ಕೃತಕ ದೇವತೆಗಳನ್ನು ನಿಂದಿಸುವುದನ್ನೂ ಕುರ್‌ಆನ್ ವಿರೋಧಿಸುತ್ತದೆ. ದೇವನು ಪರಮ ಕರುಣಾಳುವಾಗಿದ್ದಾನೆ. ತನ್ನ ಆಧಿಪತ್ಯದಲ್ಲಿರುವ ಅತಿ ನೀಚ ರಾಜದ್ರೋಹಿ ಕೂಡಾ ಪಶ್ಚಾತ್ತಾಪ ಪಟ್ಟರೆ ಆತನನ್ನೂ ಕ್ಷಮಿಸಿ ಬಿಡುತ್ತಾನೆ. ಆತನು ಕೇವಲ ಮುಸ್ಲಿಮರ ಒಡೆಯನಲ್ಲ, ಸಂಪೂರ್ಣ ಮಾನವಕುಲದ ಒಡೆಯನಾಗಿದ್ದಾನೆ. ಅಂತೆಯೇ ಅಂತಿಮ ಪ್ರವಾದಿಯು ಸಂಪೂರ್ಣ ಮಾನವಕುಲಕ್ಕೆ ಅನುಗ್ರಹವಾಗಿರುವರೆಂದು ಕುರ್‌ಆನ್ ಹೇಳುತ್ತದೆ. ಕುರ್‌ಆನ್ ಸ್ವಯಂ ಇಡೀ ಮಾನವ ಜನಾಂಗಕ್ಕೆ ಮಾರ್ಗದರ್ಶಕವಾಗಿದೆ. ದೇವನು, ಅದೇ ರೀತಿ ಕೊನೆಯ ಪ್ರವಾದಿ ಮತ್ತು ಕುರ್‌ಆನ್ ಸಂಪೂರ್ಣ ಮಾನವಕುಲಕ್ಕಾಗಿರುವುದರಿಂದ ಅವು ಮಾನವೀಯ ಸಹಾನುಭೂತಿ ಮತ್ತು ಸಹೋದರತೆಯ ಭದ್ರ ಬುನಾದಿಯನ್ನು ನಿರ್ಮಿಸುತ್ತವೆ. ಅನೇಕ ಕುರ್‌ಆನ್ ವಚನಗಳು ಮಾನವ ಸಹೋದರತೆ ಮತ್ತು ಏಕತೆಯ ಉದಾತ್ತ ಕಲ್ಪನೆಯನ್ನು ವರ್ಣಿಸಿವೆ.

"ಓ ಜನರೇ! ನಿಮ್ಮನ್ನೊಬ್ಬ ಪುರುಷ ಮತ್ತು ಓರ್ವಳು ಸ್ತ್ರೀಯಿಂದ ನಾವು ಸೃಷ್ಟಿಸಿದೆವು ಮತ್ತು ನಿಮ್ಮನ್ನು ಅನೇಕ ಜನಾಂಗಗಳಾಗಿಯೂ ವಂಶಗಳಾಗಿಯೂ ಮಾಡಿದೆವು. ಪರಸ್ಪರರನ್ನು ನೀವು ಗುರುತಿಸುವಂತಾಗಲೆಂದು. ನಿಮ್ಮಲ್ಲಿ ಅಲ್ಲಾಹನ ಅತ್ಯಧಿಕ ಭಯವುಳ್ಳವನೇ ಅಲ್ಲಾಹನ ದೃಷ್ಟಿಯಲ್ಲಿ ಅತ್ಯಂತ ಮಾನಾರ್ಹನು".

(49:13)

## ಮಾನವ ಸಹೋದರತೆ

ಮಾಸವರೆಲ್ಲರೂ ಪ್ರಥಮ ಪ್ರವಾದಿ ಆದಮ್‌ರ(ಅ) ಸಂತಾನವಾಗಿದ್ದಾರೆ.

ಆದ್ದರಿಂದ ಮಾನವರಲ್ಲಿ ಪರಸ್ಪರ ರಕ್ತ ಸಂಬಂಧವಿದೆ. ಓರ್ವನೇ ಪೂರ್ವಜನ ಸಂತಾನವೆಂಬ ಕಲ್ಪನೆಯು ಮಾನವಕುಲದ ಭ್ರಾತೃತ್ವ ಮತ್ತು ಸಹೋದರತೆಯ ಕಲ್ಪನೆಯನ್ನು ಇನ್ನಷ್ಟು ದೃಢಪಡಿಸುತ್ತದೆ. ಮಾನವರೆಲ್ಲರೂ ಅವಿಭಜಿತ ಮಾನವ ಕುಟುಂಬದ ಸದಸ್ಯರೆಂಬ ನೆಲೆಯಲ್ಲಿ ಉನ್ನತ ಕುಟುಂಬದ ಉನ್ನತ ಸೃಷ್ಟಿಯಂತೆ ಐಕಮತ್ಯದಿಂದ ಬಾಳಬೇಕು. ಮಾನವಕುಲಕ್ಕೆ ಉಪಯುಕ್ತವಾದ ಎಲ್ಲ ಚಟುವಟಿಕೆಗಳಲ್ಲಿಯೂ ಅವರು ಪರಸ್ಪರ ಸಹಕರಿಸಬೇಕು.

## ಮಾನವಕುಲಕ್ಕೆ ಲಾಭದಾಯಕ

ನಾವಿಂದು "ಡಿವೈನ್ ಲೈಫ್ ಸೊಸೈಟಿ" ಯ ಆಶ್ರಯದಲ್ಲಿ ಪರಸ್ಪರ ಸ್ನೇಹ ಸೌಹಾರ್ದ ಬೆಳೆಸುವ ಉದ್ದೇಶದಿಂದ ಇಲ್ಲಿ ಸೇರಿದ್ದೇವೆ.

ಇಂದಿನ ಈ ಅಪ್ಪಟ ಭೌತಿಕ ಯುಗದಲ್ಲಿ, ದೇವನಲ್ಲಿ ಭಯಭಕ್ತಿಯಿರುವ ಜನರು ಇಲ್ಲಿ ನೆರೆದಿರುವುದರ ಉದ್ದೇಶವು ಮಾನವ ಕಲ್ಯಾಣದ ಮೂಲಕ ದೇವನ ಸಂಪ್ರೀತಿಯ ಗಳಿಕೆಯೇ ವಿನಾ ಪರಸ್ಪರ ದ್ವೇಷಿಸಲಿಕ್ಕಲ್ಲ. ಆದ್ದರಿಂದ ನಾವೆಲ್ಲರೂ ಮಾನವ ಜನಾಂಗವನ್ನು ಅಧಃಪತನಕ್ಕೆ ಗುರಿಪಡಿಸುವ ಅಜ್ಞಾನ, ಮೂಢನಂಬಿಕೆ, ಕಂದಾಚಾರ, ನಿರಕ್ಷರತೆ, ರೋಗ, ಬಡತನ ಮುಂತಾದುವುಗಳನ್ನು ನಿರ್ಮೂಲನಗೊಳಿಸಿ, ಜಗತ್ತಿನ ಪ್ರವಾದಿಗಳ ಸರ್ವ ಮಾನ್ಯ ಗುಣಗಳನ್ನು ನಮ್ಮ ಜೀವನದಲ್ಲಿ ಅಳವಡಿಸಲು ಪ್ರಯತ್ನಿಸಬೇಕು. ದೇವನು ನಮ್ಮೆಲ್ಲರನ್ನೂ ಸನ್ಮಾರ್ಗದಲ್ಲಿ ನಡೆಸಲಿ. ನಮ್ಮನ್ನು ಇಲ್ಲಿ ಒಂದುಗೂಡಿಸಲು ಪ್ರೇರಕವಾದ ಸಹಕಾರ ಸ್ಫೂರ್ತಿಯನ್ನು ಸದಾ ಉಳಿಸಲೆಂದು ನಾನು ಹಾರೈಸುತ್ತೇನೆ.

ನಮ್ಮ ಬಗ್ಗೆ ಹೇಳುವುದಿದ್ದರೆ, ಇಸ್ಲಾಮ್, ಪವಿತ್ರ ಕುರ್‌ಆನ್ ಮತ್ತು ಮಾನವಕುಲಕ್ಕೆ ಅನುಗ್ರಹೀತವಾದ ಕೊನೆಯ ಪ್ರವಾದಿಯೆಂದು ಕುರ್‌ಆನ್ ಘೋಷಿಸಿರುವ ಅಂತಿಮ ಪ್ರವಾದಿಯ ನಡೆನುಡಿಗಳನ್ನು ನಿಮಗೆ ತಿಳಿಸಲು ಜಮಾಅತೆ ಇಸ್ಲಾಮಿ ಹಿಂದ್ ಸದಾ ಸಿದ್ಧವಾಗಿದೆ. ಇನ್ನು ಆ ಅನುಗ್ರಹದ ಪ್ರಯೋಜನ ಪಡೆಯುವ ಭಾಗ್ಯ ಜನರಿಗೆ ಬಿಟ್ಟ ವಿಷಯ. ಧನ್ಯವಾದಗಳು!

✲ ✲ ✲ ✲